ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಸರ್ಕಾರಿ ಆಸ್ಪತ್ರೆಗಳಿಗೆ ಮಂಜೂರಾದ ವೈದ್ಯರು ಮತ್ತು ನರ್ಸ್ ಹುದ್ದೆಗಳ ಕುರಿತು

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

404 (434) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಹಾಸನ ಜಿಲ್ಲೆಯಲ್ಲಿರುವ ಪ್ರಾಥಮಿಕ ಚಿಕಿತ್ಸಾ ಕೇಂದ್ರ/ತಾಲ್ಲೂಕು ಆಸ್ಪತ್ರೆ /ಜಿಲ್ಲಾ ಆಸ್ಪತ್ರೆಗಳ ವಿವರ ನೀಡುವುದು ; ಈ ಆಸ್ಪತ್ರೆಗಳಿಗೆ ಮಂಜೂರಾದ ವೈದ್ಯರು ಮತ್ತು ನರ್ಸ್‌ಗಳ ಹುದ್ದೆಗಳೆಷ್ಟು ; ಹಾಲಿ ತುಂಬಿರುವ ಹುದ್ದೆಗಳೆಷ್ಟು ; ಖಾಲಿ ಇರುವ ಹುದ್ದೆಗಳೆಷ್ಟು ; ಆಸ್ಪತ್ರೆವಾರು ವಿವರ ನೀಡುವುದು ;

(ಆ) ಈ ಆಸ್ಪತ್ರೆಗಳಲ್ಲಿ ಖಾಲಿ ಇರುವ ವೈದ್ಯರು ಮತ್ತು ನರ್ಸ್‌ಗಳ ಹುದ್ದೆಗಳನ್ನು ತುಂಬಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು;

(ಇ) 2018-19 ಮತ್ತು 2019-20 ನೇ ಸಾಲಿನಲ್ಲಿ ಈ ಆಸ್ಪತ್ರೆಗಳಲ್ಲಿ ಎಷ್ಟು ಜನರಿಗೆ ಚಿಕಿತ್ಸೆ ನೀಡಲಾಗಿದೆ ಮತ್ತು ಯಾವ ಚಿಕಿತ್ಸೆ ನೀಡಲಾಗಿದೆ ; ಈ ಎಲ್ಲಾ ಆಸ್ಪತ್ರೆಗಳ ಲ್ಲಿ ಅಗತ್ಯವಿರುವಷ್ಟು ಔಷಧಿ ಪೂರೈಕೆ ಲಭ್ಯವಿದೆಯೇ ; ಆಸ್ಪತ್ರೆವಾರು ಅಗತ್ಯವಿರುವ ಔಷಧಿಗಳ ವಿವರ ಮತ್ತು ಪೂರೈಕೆ ವಿವರ ನೀಡುವುದು;

(ಈ) ಹಾಸನ ಜಿಲ್ಲೆಗೆ ಎಷ್ಟು ಆಂಬ್ಯುಲೆನ್ಸ್‌ಗಳ ಅವಶ್ಯಕತೆ ಇದೆ; ಪ್ರಸ್ತುತ ಎಷ್ಟು ಆಂಬ್ಯುಲೆನ್ಸ್‌ಗಳು ಕಾರ್ಯನಿರ್ವಹಿಸುತ್ತಿವೆ. ಯಾವ ಯಾವ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿವೆ? (ವಿವರ ನೀಡುವುದು)